# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಡಿಸೆಂಬರ್ ೧೧, ೨೦೧೪ (ಮಾರ್ಗಶಿರ ೨೦, ಶಕ ವರ್ಷ ೧೯೩೬)<br>Bengaluru, Thursday, December 11, 2014 (Margashira 20, Shaka Varsha 1936) | ಸಂಚಿಕೆ ೪೯<br>Issue 49 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಾನೂನು ಸಚಿವಾಲಯ

**ವಿಷಯ :** ಬ್ಯಾಡಗಿ ಕಂದಾಯ ತಾಲ್ಲೂಕು, ಹಾವೇರಿ ಜಿಲ್ಲೆ ಇಲ್ಲಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ: ಲಾ 261 ಎಲ್‌ಸಿಎಲ್ 2014, ದಿನಾಂಕ: 13-06-2014.
2. ಜಿಲ್ಲಾಧಿಕಾರಿಗಳ ಕಾರ್ಯಾಲಯ, ಹಾವೇರಿ ಜಿಲ್ಲೆರವರ ಪತ್ರ ದಿನಾಂಕ: 17-07-2014.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ ಜಿಲ್ಲೆ ರವರ ಪತ್ರ ದಿನಾಂಕ: 26-8-2014.

**ಪ್ರಸ್ತಾವನೆ:**

ಸರ್ಕಾರವು ರಾಜ್ಯದ ಎಲ್ಲಾ ಕಂದಾಯ ತಾಲ್ಲೂಕುಗಳಿಗೆ ಒಂದೊಂದು ನೋಟರಿ ಹುದ್ದೆಯನ್ನು ಸೃಜಿಸಲು ತೀರ್ಮಾನಿಸಿದ್ದು, ಅದರಂತೆ, ಮೇಲೆ ಓದಲಾದ (1)ರ ದಿನಾಂಕ: 13-06-2014 ರ ಪತ್ರದಲ್ಲಿ ಹಾವೇರಿ ಜಿಲ್ಲೆಯ ಬ್ಯಾಡಗಿ ಕಂದಾಯ ತಾಲ್ಲೂಕಿನಲ್ಲಿ ಹಾಲಿ ಕೆಲಸ ನಿರ್ವಹಿಸುತ್ತಿರುವ 02 ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿರುವ ಬಗ್ಗೆ ಹಾಗೂ ಇನ್ನೂ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಸಮರ್ಥನೀಯ ವಿವರಣೆಯನ್ನು ಒದಗಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ ಜಿಲ್ಲೆ ಮತ್ತು ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರುಗಳನ್ನು ಕೋರಲಾಗಿತ್ತು.

ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರು ಮೇಲೆ ಓದಲಾದ (2)ರ ದಿನಾಂಕ: 17-07-2014ರ ಪತ್ರದಲ್ಲಿ ಪ್ರತಿಯೊಂದು ತಾಲ್ಲೂಕಿನಲ್ಲಿಯೂ ಸಾರ್ವಜನಿಕರು ಹಲವಾರು ಉದ್ದೇಶಗಳಿಗೆ ಪ್ರಮಾಣ ಪತ್ರಗಳನ್ನು ಸಲ್ಲಿಸಬೇಕಾಗಿರುವ ಪ್ರಸಂಗಗಳು ಇರುವುದರಿಂದ, ಬ್ಯಾಡಗಿ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ನೇಮಕಾತಿಗೊಳಿಸುವುದು ಅವಶ್ಯವಿದೆ ಎಂದು ಅಭಿಪ್ರಾಯ ಪಟ್ಟಿರುತ್ತಾರೆ.

ಅದರಂತೆ, ದಿವಾಣಿ ನ್ಯಾಯಾಧೀಶರು ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಬ್ಯಾಡಗಿ ಇವರು, ಬ್ಯಾಡಗಿ ಕಂದಾಯ ತಾಲ್ಲೂಕಿನಲ್ಲಿ ಕಾರ್ಯನಿರ್ವಹಿಸುತ್ತಿರುವ ಇಬ್ಬರು ನೋಟರಿಗಳ ಕಾರ್ಯ ನಿರ್ವಹಣೆಯ ವರದಿಗಳನ್ನು ಪರಿಶೀಲಿಸಲಾಗಿ, ಬ್ಯಾಡಗಿ ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ಒಂದು ನೋಟರಿ ಹುದ್ದೆಯನ್ನು ಸೃಜಿಸುವ ಅವಶ್ಯಕತೆ ಇರುವುದು ಕಂಡು ಬರುತ್ತದೆಂದು ವರದಿ ನೀಡಿದ್ದು, ಸದರಿ ವರದಿಯನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ ಜಿಲ್ಲೆ ಇವರು ಮೇಲೆ ಓದಲಾದ (3)ರ ದಿನಾಂಕ: 26-08-2014ರ ಪತ್ರದಲ್ಲಿ ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ, ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಲಾ 261 ಎಲ್‌ಸಿಎಲ್ 2014, ಬೆಂಗಳೂರು, ದಿನಾಂಕ:28-10-2014.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಹಾವೇರಿ ಜಿಲ್ಲೆಯ ಬ್ಯಾಡಗಿ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),

ಕಾನೂನು ಇಲಾಖೆ (ಆಡಳಿತ-2).

**P.R. 795**
**S.C. 25**

## ಕಾನೂನು ಸಚಿವಾಲಯ

**ವಿಷಯ :** ರಾಣಿಬೆನ್ನೂರು ಕಂದಾಯ ತಾಲ್ಲೂಕು, ಹಾವೇರಿ ಜಿಲ್ಲೆ ಇಲ್ಲಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಪತ್ರ ಸಂಖ್ಯೆ: ಲಾ 260 ಎಲ್‌ಸಿಎಲ್ 2014, ದಿನಾಂಕ: 13–06–2014.

2. ಜಿಲ್ಲಾಧಿಕಾರಿಗಳ ಕಾರ್ಯಾಲಯ, ಹಾವೇರಿ ಜಿಲ್ಲೆರವರ ಪತ್ರ ದಿನಾಂಕ: 17–07–2014.

3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ ಜಿಲ್ಲೆ ರವರ ಪತ್ರ ದಿನಾಂಕ: 26–8–2014.

**ಪ್ರಸ್ತಾವನೆ:**

ಸರ್ಕಾರವು ರಾಜ್ಯದ ಎಲ್ಲಾ ಕಂದಾಯ ತಾಲ್ಲೂಕುಗಳಿಗೆ ಒಂದೊಂದು ನೋಟರಿ ಹುದ್ದೆಯನ್ನು ಸೃಜಿಸಲು ತೀರ್ಮಾನಿಸಿದ್ದು, ಅದರಂತೆ, ಮೇಲೆ ಓದಲಾದ (1)ರ ದಿನಾಂಕ: 13–06–2014 ರ ಪತ್ರದಲ್ಲಿ ಹಾವೇರಿ ಜಿಲ್ಲೆಯ ರಾಣಿಬೆನ್ನೂರು ಕಂದಾಯ ತಾಲ್ಲೂಕಿನಲ್ಲಿ ಹಾಲಿ ಕೆಲಸ ನಿರ್ವಹಿಸುತ್ತಿರುವ 02 ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿರುವ ಬಗ್ಗೆ ಹಾಗೂ ಇನ್ನೂ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಸಮರ್ಥನೀಯ ವಿವರಣೆಯನ್ನು ಒದಗಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ ಜಿಲ್ಲೆ ಮತ್ತು ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರುಗಳನ್ನು ಕೋರಲಾಗಿತ್ತು.

ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರು ಮೇಲೆ ಓದಲಾದ (2)ರ ದಿನಾಂಕ: 17–07–2014ರ ಪತ್ರದಲ್ಲಿ ಪ್ರತಿಯೊಂದು ತಾಲ್ಲೂಕಿನಲ್ಲಿಯೂ ಸಾರ್ವಜನಿಕರು ಹಲವಾರು ಉದ್ದೇಶಗಳಿಗೆ ಪ್ರಮಾಣ ಪತ್ರಗಳನ್ನು ಸಲ್ಲಿಸಬೇಕಾಗಿರುವ ಪ್ರಸಂಗಗಳು ಇರುವುದರಿಂದ, ರಾಣಿಬೆನ್ನೂರು ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ನೇಮಕಾತಿಗೊಳಿಸುವುದು ಅವಶ್ಯವಿದೆ ಎಂದು ಅಭಿಪ್ರಾಯ ಪಟ್ಟಿರುತ್ತಾರೆ.

ಅದರಂತೆ, ಎರಡನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಹಾವೇರಿ ಜಿಲ್ಲೆ ಇವರು, ರಾಣಿಬೆನ್ನೂರು ಕಂದಾಯ ತಾಲ್ಲೂಕು ವ್ಯಾಪ್ತಿಯು ಜಿಲ್ಲೆಯಲ್ಲಿಯೇ ದೊಡ್ಡ ತಾಲ್ಲೂಕಾಗಿದ್ದು, ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಅವಶ್ಯಕತೆ ಇರುತ್ತದೆಂದು ತಿಳಿಸಿದ್ದು, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ ಜಿಲ್ಲೆ ಇವರು ಸದರಿ ಎರಡನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ವರದಿಯನ್ನು ಓದಲಾದ (3)ರ ದಿನಾಂಕ: 26–08–2014ರ ಪತ್ರದಲ್ಲಿ ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ, ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಲಾ 260 ಎಲ್‌ಸಿಎಲ್ 2014, ಬೆಂಗಳೂರು, ದಿನಾಂಕ:28–10–2014.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಹಾವೇರಿ ಜಿಲ್ಲೆಯ ರಾಣಿಬೆನ್ನೂರು ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),

ಕಾನೂನು ಇಲಾಖೆ (ಆಡಳಿತ–2).

**P.R. 796**

**S.C. 25**

## ಕಾನೂನು ಸಚಿವಾಲಯ

**ವಿಷಯ :** ಗೌರಿಬಿದನೂರು ಕಂದಾಯ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ ಇಲ್ಲಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಪತ್ರ ಸಂಖ್ಯೆ: ಲಾ 118 ಎಲ್‌ಸಿಎಲ್ 2014, ದಿನಾಂಕ: 24–04–2014.

2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಬಳ್ಳಾಪುರ ಜಿಲ್ಲೆರವರ ಪತ್ರ ದಿನಾಂಕ: 19–08–2014.

3. ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿಕ್ಕಬಳ್ಳಾಪುರ ಜಿಲ್ಲೆರವರ ಪತ್ರ ದಿನಾಂಕ: 12–09–2014.

**ಪ್ರಸ್ತಾವನೆ:**

ಸರ್ಕಾರವು ರಾಜ್ಯದ ಎಲ್ಲಾ ಕಂದಾಯ ತಾಲ್ಲೂಕುಗಳಿಗೆ ಒಂದೊಂದು ನೋಟರಿ ಹುದ್ದೆಯನ್ನು ಸೃಜಿಸಲು ತೀರ್ಮಾನಿಸಿದ್ದು, ಅದರಂತೆ, ಮೇಲೆ ಓದಲಾದ (1)ರ ದಿನಾಂಕ: 24–04–2014ರ ಪತ್ರದಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯ ಗೌರಿಬಿದನೂರು ಕಂದಾಯ ತಾಲ್ಲೂಕಿನಲ್ಲಿ ಹಾಲಿ ಇರುವ 03 ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿರುವ ಬಗ್ಗೆ ಹಾಗೂ ಇನ್ನೂ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಸಮರ್ಥನೀಯ ವಿವರಣೆಯನ್ನು ಒದಗಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಬಳ್ಳಾಪುರ ಜಿಲ್ಲೆ ಮತ್ತು ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಇವರುಗಳನ್ನು ಕೋರಲಾಗಿತ್ತು.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಬಳ್ಳಾಪುರ ಜಿಲ್ಲೆ ಇವರು, ಮೇಲೆ ಓದಲಾದ (2)ರ ದಿನಾಂಕ: 19–08–2014ರ ಪತ್ರದಲ್ಲಿ ಗೌರಿಬಿದನೂರು ತಾಲ್ಲೂಕಿನಲ್ಲಿ ಎರಡು ನ್ಯಾಯಾಲಯಗಳು ಪ್ರತಿ ದಿನವೂ ಕಾರ್ಯ ನಿರ್ವಹಿಸುತ್ತಿದ್ದು, ಸೀನಿಯರ್ ಸಿವಿಲ್ ಜಡ್ಜ್ ಮತ್ತು ಜೆಎಂಎಫ್‌ಸಿ ನ್ಯಾಯಾಲಯವು ವಾರದಲ್ಲಿ ಎರಡು ಬಾರಿ ಕೆಲಸ ನಿರ್ವಹಿಸುತ್ತದ್ದು, ಹಾಲಿ ಕೆಲಸ ನಿರ್ವಹಿಸುತ್ತಿರುವ ನೋಟರಿಗಳಿಗೆ ಕೆಲಸದ ಒತ್ತಡ ಜಾಸ್ತಿಯಿರುವುದರಿಂದ, ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಅವಶ್ಯಕತೆ ಇದೆ ಎಂದು ವರದಿಯನ್ನು ನೀಡಿರುತ್ತಾರೆ.

ಅದರಂತೆ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಇವರು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ವರದಿಯನ್ನು ಲಗತ್ತಿಸಿ, ಮೇಲೆ ಓದಲಾದ (3)ರ ದಿನಾಂಕ: 12–09–2014ರ ಪತ್ರದಲ್ಲಿ ಗೌರಿಬಿದನೂರು ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವಂತೆ ಕೋರಿರುತ್ತಾರೆ

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ, ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಲಾ 118 ಎಲ್‌ಸಿಎಲ್ 2014, ಬೆಂಗಳೂರು, ದಿನಾಂಕ:21–10–2014.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಚಿಕ್ಕಬಳ್ಳಾಪುರ ಜಿಲ್ಲೆಯ ಗೌರಿಬಿದನೂರು ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),
ಕಾನೂನು ಇಲಾಖೆ (ಆಡಳಿತ-2).

**P.R. 797**
**S.C. 25**

## ಕಾನೂನು ಸಚಿವಾಲಯ

**ವಿಷಯ :** ಬಾಗೇಪಲ್ಲಿ ಕಂದಾಯ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ ಇಲ್ಲಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ: ಲಾ 119 ಎಲ್‌ಸಿಎಲ್ 2014, ದಿನಾಂಕ: 24-04-2014.
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಬಳ್ಳಾಪುರ ಜಿಲ್ಲೆರವರ ಪತ್ರ ದಿನಾಂಕ: 19-08-2014.
3. ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿಕ್ಕಬಳ್ಳಾಪುರ ಜಿಲ್ಲೆರವರ ಪತ್ರ ದಿನಾಂಕ: 12-09-2014.

**ಪ್ರಸ್ತಾವನೆ:**

ಸರ್ಕಾರವು ರಾಜ್ಯದ ಎಲ್ಲಾ ಕಂದಾಯ ತಾಲ್ಲೂಕುಗಳಿಗೆ ಒಂದೊಂದು ನೋಟರಿ ಹುದ್ದೆಯನ್ನು ಸೃಜಿಸಲು ತೀರ್ಮಾನಿಸಿದ್ದು, ಅದರಂತೆ, ಮೇಲೆ ಓದಲಾದ (1)ರ ದಿನಾಂಕ: 24-04-2014ರ ಪತ್ರದಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯ ಬಾಗೇಪಲ್ಲಿ ಕಂದಾಯ ತಾಲ್ಲೂಕಿನಲ್ಲಿ ಹಾಲಿ ಇರುವ 02 ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿರುವ ಬಗ್ಗೆ ಹಾಗೂ ಇನ್ನೂ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಸಮರ್ಥನೀಯ ವಿವರಣೆಯನ್ನು ಒದಗಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಬಳ್ಳಾಪುರ ಜಿಲ್ಲೆ ಮತ್ತು ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಇವರುಗಳನ್ನು ಕೋರಲಾಗಿತ್ತು.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಬಳ್ಳಾಪುರ ಜಿಲ್ಲೆ ಇವರು, ಮೇಲೆ ಓದಲಾದ (2)ರ ದಿನಾಂಕ: 19-08-2014ರ ಪತ್ರದಲ್ಲಿ ಬಾಗೇಪಲ್ಲಿ ತಾಲ್ಲೂಕಿನಲ್ಲಿ ಕೆಲಸದ ಒತ್ತಡ ಜಾಸ್ತಿಯಿರುವುದರಿಂದ, ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಅವಶ್ಯಕತೆ ಇದೆ ಎಂದು ವರದಿಯನ್ನು ನೀಡಿರುತ್ತಾರೆ.

ಅದರಂತೆ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಇವರು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ವರದಿಯನ್ನು ಲಗತ್ತಿಸಿ, ಮೇಲೆ ಓದಲಾದ (3)ರ ದಿನಾಂಕ: 12-09-2014ರ ಪತ್ರದಲ್ಲಿ ಬಾಗೇಪಲ್ಲಿ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವಂತೆ ಕೋರಿರುತ್ತಾರೆ

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ, ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಲಾ 119 ಎಲ್‌ಸಿಎಲ್ 2014, ಬೆಂಗಳೂರು, ದಿನಾಂಕ:21-10-2014.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಚಿಕ್ಕಬಳ್ಳಾಪುರ ಜಿಲ್ಲೆಯ ಬಾಗೇಪಲ್ಲಿ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),
ಕಾನೂನು ಇಲಾಖೆ (ಆಡಳಿತ-2).

**P.R. 798**
**S.C. 25**

## ಕಾನೂನು ಸಚಿವಾಲಯ

**ವಿಷಯ :** ಹೊಸಪೇಟೆ ಕಂದಾಯ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇಲ್ಲಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ: ಲಾ 28 ಎಲ್‌ಸಿಎಲ್ 2014, ದಿನಾಂಕ: 26-02-2014.
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ಜಿಲ್ಲೆರವರ ಪತ್ರ ದಿನಾಂಕ: 04-03-2014.
3. ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬಳ್ಳಾರಿ ಜಿಲ್ಲೆರವರ ಪತ್ರ ದಿನಾಂಕ: 12-09-2014.

**ಪ್ರಸ್ತಾವನೆ:**

ಬಳ್ಳಾರಿ ಜಿಲ್ಲೆಯ ಹೊಸಪೇಟೆ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವಂತೆ ಸಾರ್ವಜನಿಕರಿಂದ ಮನವಿಗಳು ಸರ್ಕಾರದಲ್ಲಿ ಸ್ವೀಕೃತವಾಗಿದ್ದು, ಅದರಂತೆ, ಮೇಲೆ ಓದಲಾದ (1)ರ ದಿನಾಂಕ: 26-02-2014ರ ಪತ್ರದಲ್ಲಿ ಹೊಸಪೇಟೆ ಕಂದಾಯ ತಾಲ್ಲೂಕಿನಲ್ಲಿ ಹಾಲಿ ಇರುವ 03 ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿರುವ ಬಗ್ಗೆ ಹಾಗೂ ಇನ್ನೂ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಸಮರ್ಥನೀಯ ವಿವರಣೆಯನ್ನು ಒದಗಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ಜಿಲ್ಲೆ ಮತ್ತು ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಇವರುಗಳನ್ನು ಕೋರಲಾಗಿತ್ತು.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ಜಿಲ್ಲೆ ಇವರು, ಮೇಲೆ ಓದಲಾದ (2)ರ ದಿನಾಂಕ: 04-03-2014ರ ಪತ್ರದಲ್ಲಿ ಕೇಂದ್ರ ಸರ್ಕಾರದಿಂದ ನೇಮಕಗೊಂಡ ಒಬ್ಬ ನೋಟರಿಯವರು ಕಾರ್ಯನಿರ್ವಹಿಸುತ್ತಿದ್ದು, ಹೊಸಪೇಟೆ ತಾಲ್ಲೂಕಿನಲ್ಲಿ ರಾಜ್ಯ ಸರ್ಕಾರದಿಂದ ನೇಮಕಗೊಂಡ 04 ಜನ ನೋಟರಿಗಳು ಇದ್ದು, ಇರುವ ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿದ್ದು, ಬಳ್ಳಾರಿ ಜಿಲ್ಲೆಯ ಹೊಸಪೇಟೆ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಬಹುದೆಂದು ಅಭಿಪ್ರಾಯ ನೀಡಿರುತ್ತಾರೆ.

ಅದರಂತೆ, ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಇವರು ಮೇಲೆ ಓದಲಾದ (3)ರ ದಿನಾಂಕ: 12-09-2014ರ ಪತ್ರದೊಂದಿಗೆ, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ಜಿಲ್ಲೆ ಇವರು ದಿನಾಂಕ: 04-03-2014 ರಂದು ಸರ್ಕಾರಕ್ಕೆ ಸಲ್ಲಿಸಿದ ಪತ್ರವನ್ನು ಅಡಕವಿರಿಸುತ್ತಾ, ಸದರಿ ಪ್ರಧಾನ ಜಿಲ್ಲಾ

ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ಜಿಲ್ಲೆ ಇವರ ಅಭಿಪ್ರಾಯದಂತೆ ಹೊಸಪೇಟೆ ಕಂದಾಯ ತಾಲ್ಲೂಕಿಗೆ ಹೊಸದಾಗಿ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಬಹುದು ಎಂದು ಅಭಿಪ್ರಾಯಿಸಿ ವರದಿ ನೀಡಿರುತ್ತಾರೆ.

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ, ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಲಾ 28 ಎಲ್‌ಸಿಎಲ್ 2014, ಬೆಂಗಳೂರು, ದಿನಾಂಕ:20-10-2014.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಬಳ್ಳಾರಿ ಜಿಲ್ಲೆಯ ಹೊಸಪೇಟೆ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),
ಕಾನೂನು ಇಲಾಖೆ (ಆಡಳಿತ-2).

**P.R. 799**
**S.C. 25**

## ಕಾನೂನು ಸಚಿವಾಲಯ

**ವಿಷಯ :** ಶಿಡ್ಲಘಟ್ಟ ಕಂದಾಯ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ ಇಲ್ಲಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ: ಲಾ 117 ಎಲ್‌ಸಿಎಲ್ 2014, ದಿನಾಂಕ: 24-04-2014.
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಬಳ್ಳಾಪುರ ಜಿಲ್ಲೆರವರ ಪತ್ರ ದಿನಾಂಕ: 19-08-2014.
3. ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿಕ್ಕಬಳ್ಳಾಪುರ ಜಿಲ್ಲೆರವರ ಪತ್ರ ದಿನಾಂಕ: 12-09-2014.

**ಪ್ರಸ್ತಾವನೆ:**

ಸರ್ಕಾರವು ರಾಜ್ಯದ ಎಲ್ಲಾ ಕಂದಾಯ ತಾಲ್ಲೂಕುಗಳಿಗೆ ಒಂದೊಂದು ನೋಟರಿ ಹುದ್ದೆಯನ್ನು ಸೃಜಿಸಲು ತೀರ್ಮಾನಿಸಿದ್ದು, ಅದರಂತೆ, ಮೇಲೆ ಓದಲಾದ (1)ರ ದಿನಾಂಕ: 24-04-2014ರ ಪತ್ರದಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯ ಶಿಡ್ಲಘಟ್ಟ ಕಂದಾಯ ತಾಲ್ಲೂಕಿನಲ್ಲಿ ಹಾಲಿ ಇರುವ 02 ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿರುವ ಬಗ್ಗೆ ಹಾಗೂ ಇನ್ನೂ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಸಮರ್ಥನೀಯ ವಿವರಣೆಯನ್ನು ಒದಗಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಬಳ್ಳಾಪುರ ಜಿಲ್ಲೆ ಮತ್ತು ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಇವರುಗಳನ್ನು ಕೋರಲಾಗಿತ್ತು.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಬಳ್ಳಾಪುರ ಜಿಲ್ಲೆ ಇವರು, ಮೇಲೆ ಓದಲಾದ (2)ರ ದಿನಾಂಕ: 19-08-2014ರ ಪತ್ರದಲ್ಲಿ ಶಿಡ್ಲಘಟ್ಟ ತಾಲ್ಲೂಕಿನಲ್ಲಿ ಎರಡು ನ್ಯಾಯಾಲಯಗಳು ಪ್ರತಿ ದಿನವೂ ಕಾರ್ಯ ನಿರ್ವಹಿಸುತ್ತಿದ್ದು, ಸೀನಿಯರ್ ಸಿವಿಲ್ ಜಡ್ಜ್ ಮತ್ತು ಜೆಎಂಎಫ್‌ಸಿ ನ್ಯಾಯಾಲಯವು ವಾರದಲ್ಲಿ ಎರಡು ಬಾರಿ ಕೆಲಸ ನಿರ್ವಹಿಸುತ್ತಿರುವುದರಿಂದ, ಹಾಲಿ ಕೆಲಸ ನಿರ್ವಹಿಸುತ್ತಿರುವ ನೋಟರಿಗಳಿಗೆ ಕೆಲಸದ ಒತ್ತಡ ಜಾಸ್ತಿಯಿರುವುದರಿಂದ, ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಅವಶ್ಯಕತೆ ಇದೆ ಎಂದು ವರದಿಯನ್ನು ನೀಡಿರುತ್ತಾರೆ.

ಅದರಂತೆ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಇವರು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ವರದಿಯನ್ನು ಲಗತ್ತಿಸಿ, ಮೇಲೆ ಓದಲಾದ (3)ರ ದಿನಾಂಕ: 12-09-2014ರ ಪತ್ರದಲ್ಲಿ ಶಿಡ್ಲಘಟ್ಟ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವಂತೆ ಕೋರಿರುತ್ತಾರೆ

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ, ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಲಾ 117 ಎಲ್‌ಸಿಎಲ್ 2014, ಬೆಂಗಳೂರು, ದಿನಾಂಕ:21-10-2014.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಚಿಕ್ಕಬಳ್ಳಾಪುರ ಜಿಲ್ಲೆಯ ಶಿಡ್ಲಘಟ್ಟ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),
ಕಾನೂನು ಇಲಾಖೆ (ಆಡಳಿತ-2).

**P.R. 800**
**S.C. 25**

## ಕಾನೂನು ಸಚಿವಾಲಯ

**ವಿಷಯ :** ಗುಡಿಬಂಡೆ ಕಂದಾಯ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ ಇಲ್ಲಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ: ಲಾ 116 ಎಲ್‌ಸಿಎಲ್ 2014, ದಿನಾಂಕ: 24-04-2014.
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಬಳ್ಳಾಪುರ ಜಿಲ್ಲೆರವರ ಪತ್ರ ದಿನಾಂಕ: 19-08-2014.
3. ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿಕ್ಕಬಳ್ಳಾಪುರ ಜಿಲ್ಲೆರವರ ಪತ್ರ ದಿನಾಂಕ: 12-09-2014.

**ಪ್ರಸ್ತಾವನೆ:**

ಸರ್ಕಾರವು ರಾಜ್ಯದ ಎಲ್ಲಾ ಕಂದಾಯ ತಾಲ್ಲೂಕುಗಳಿಗೆ ಒಂದೊಂದು ನೋಟರಿ ಹುದ್ದೆಯನ್ನು ಸೃಜಿಸಲು ತೀರ್ಮಾನಿಸಿದ್ದು, ಅದರಂತೆ, ಮೇಲೆ ಓದಲಾದ (1)ರ ದಿನಾಂಕ: 24-04-2014ರ ಪತ್ರದಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯ ಗುಡಿಬಂಡೆ ಕಂದಾಯ ತಾಲ್ಲೂಕಿನಲ್ಲಿ ಹಾಲಿ ಇರುವ 02 ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿರುವ ಬಗ್ಗೆ ಹಾಗೂ ಇನ್ನೂ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಸಮರ್ಥನೀಯ ವಿವರಣೆಯನ್ನು ಒದಗಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಬಳ್ಳಾಪುರ ಜಿಲ್ಲೆ ಮತ್ತು ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಇವರುಗಳನ್ನು ಕೋರಲಾಗಿತ್ತು.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಬಳ್ಳಾಪುರ ಜಿಲ್ಲೆ ಇವರು, ಮೇಲೆ ಓದಲಾದ (2)ರ ದಿನಾಂಕ: 19–08–2014ರ ಪತ್ರದಲ್ಲಿ ಗುಡಿಬಂಡೆ ತಾಲ್ಲೂಕಿನಲ್ಲಿ ಕೆಲಸದ ಒತ್ತಡ ಜಾಸ್ತಿಯಿರುವುದರಿಂದ, ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಅವಶ್ಯಕತೆ ಇದೆ ಎಂದು ವರದಿಯನ್ನು ನೀಡಿರುತ್ತಾರೆ.

ಅದರಂತೆ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಇವರು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ವರದಿಯನ್ನು ಲಗತ್ತಿಸಿ, ಮೇಲೆ ಓದಲಾದ (3)ರ ದಿನಾಂಕ: 12–09–2014ರ ಪತ್ರದಲ್ಲಿ ಗುಡಿಬಂಡೆ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವಂತೆ ಕೋರಿರುತ್ತಾರೆ

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ, ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಲಾ 120 ಎಲ್‌ಸಿಎಲ್ 2014, ಬೆಂಗಳೂರು, ದಿನಾಂಕ:21–10–2014.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಚಿಕ್ಕಬಳ್ಳಾಪುರ ಜಿಲ್ಲೆಯ ಗುಡಿಬಂಡೆ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),
ಕಾನೂನು ಇಲಾಖೆ (ಆಡಳಿತ–2).

**P.R. 801**
**S.C. 25**

## ತೋಟಗಾರಿಕೆ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ರಂಗಸ್ವಾಮಿ ಗುಡ್ಡ ತೋಟಗಾರಿಕೆ ಕ್ಷೇತ್ರದಲ್ಲಿ 70.00 ಎಕರೆ ಜಮೀನನ್ನು ಕೃ.ವಿ.ವಿ., ಬೆಂಗಳೂರುರವರಿಗೆ ನೀಡುವ ಬಗ್ಗೆ.

**ಓದಲಾಗಿದೆ :**
1. ಕುಲಸಚಿವರು, ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು ಇವರ ಪತ್ರ ದಿನಾಂಕ: 18–06–2014.
2. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ED/KSHDA/ಸತೋನಿ.2/7/2013–14/299 ದಿನಾಂಕ: 08–07–2014.

**ಸರ್ಕಾರದ ಆದೇಶ ಸಂಖ್ಯೆ: ತೋಇ 361 ತೋಇವಿ 2013 ಬೆಂಗಳೂರು, ದಿನಾಂಕ: 26ನೇ ಆಗಸ್ಟ್, 2014**

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ 1ರ ಪತ್ರದಲ್ಲಿ ಕುಲಸಚಿವರು, ಕೃಷಿ ವಿಶ್ವವಿದ್ಯಾಲಯ, ಬೆಂಗಳೂರುರವರು ರಾಜ್ಯದಲ್ಲಿ ಮೇವಿನ ಬೆಳೆಗಳ ಕೊರತೆ ಇರುವ ನಿಮಿತ್ತ ಈ ಕೊರತೆಯನ್ನು ನೀಗಿಸುವ ಬಗ್ಗೆ ಸಂಶೋಧನೆಯನ್ನು ನಡೆಸಲು ಈ ಕಾರ್ಯಕ್ಕೆ ಅನುವಾಗುವಂತೆ ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ರಂಗಸ್ವಾಮಿ ಗುಡ್ಡ ತೋಟಗಾರಿಕೆ ಕ್ಷೇತ್ರದಲ್ಲಿ 70.00 ಎಕರೆ ಜಮೀನನ್ನು ಕೃಷಿ ವಿಶ್ವವಿದ್ಯಾಲಯ, ಬೆಂಗಳೂರುರವರಿಗೆ ಹಸ್ತಾಂತರಿಸಲು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ 2ರ ಪತ್ರದಲ್ಲಿ ಈ ಜಮೀನಿನ ಒಡೆತನವನ್ನು ಇಲಾಖೆಯ ವ್ಯಾಪ್ತಿಯಲ್ಲಿ ಕಾಯ್ದಿರಿಸಿಕೊಂಡು ಬೆಂಗಳೂರು ಕೃಷಿ ವಿಶ್ವವಿದ್ಯಾಲಯ ರವರಿಗೆ ಹಸ್ತಾಂತರಿಸಲು ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರು ಅನುಮೋದನೆ ನೀಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ ಮುಂದಿನ ಕಾರ್ಯಕಾರಿ ಸಮಿತಿ ಅನುಮೋದನೆ ನಿರೀಕ್ಷಿಸಿ ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ರಂಗಸ್ವಾಮಿ ಗುಡ್ಡ ತೋಟಗಾರಿಕೆ ಕ್ಷೇತ್ರದಲ್ಲಿ ಮೇವು ಬೆಳೆ ಬಗ್ಗೆ ಸಂಶೋಧನೆ ಕೈಗೊಳ್ಳಲು 70.00ಎಕರೆ ಜಮೀನನ್ನು ಇಲಾಖೆಯ ಒಡೆತನದಲ್ಲಿ ಕಾಯ್ದಿರಿಸಿಕೊಂಡು ಷರತ್ತು ಹಾಗೂ ನಿಬಂಧನೆಗಳಿಗೊಳಪಟ್ಟು ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು ಇವರಿಗೆ ಹಸ್ತಾಂತರಿಸಲು ಆದೇಶ ಹೊರಡಿಸುವಂತೆ ತೋಟಗಾರಿಕೆ ನಿರ್ದೇಶಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ತೋಟಗಾರಿಕೆ ಇಲಾಖೆಯ ಜಮೀನನ್ನು ಕೃಷಿ ವಿಶ್ವವಿದ್ಯಾಲಯಕ್ಕೆ ಹಸ್ತಾಂತರಿಸುವ ಬಗ್ಗೆ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಣೆಗಳ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ರಂಗಸ್ವಾಮಿ ಗುಡ್ಡ ತೋಟಗಾರಿಕೆ ಕ್ಷೇತ್ರದಲ್ಲಿ ಮೇವು ಬೆಳೆ ಬಗ್ಗೆ ಸಂಶೋಧನೆ ಕೈಗೊಳ್ಳಲು 70.00 ಎಕರೆ ಜಮೀನಿನ ಒಡೆತನವನ್ನು ತೋಟಗಾರಿಕೆ ಇಲಾಖೆಯಲ್ಲಿಯೇ ಉಳಿಸಿಕೊಂಡು ಕೃಷಿ ವಿಶ್ವವಿದ್ಯಾಲಯ, ಬೆಂಗಳೂರುರವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಹಸ್ತಾಂತರಿಸಿ ಆದೇಶಿಸಲಾಗಿದೆ.

1) ಈ ಪ್ರದೇಶದ ಒಡೆತನವು ತೋಟಗಾರಿಕೆ ಇಲಾಖೆಯ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ ಅಧೀನದಲ್ಲಿಯೇ ಮುಂದುವರೆಯುತ್ತದೆ.

2) ಕೃಷಿ ವಿಶ್ವವಿದ್ಯಾಲಯ, ಬೆಂಗಳೂರುರವರು ಸದರಿ ಜಮೀನನ್ನು ಮೇವು ಬೆಳೆಯ ಸಂಶೋಧನೆ ಕಾರ್ಯಗಳಿಗೆ ಹೊರತುಪಡಿಸಿ ಇತರೆ ಕಾರ್ಯಗಳಿಗೆ ಉಪಯೋಗಿಸಿದ್ದಲ್ಲಿ, ಸದರಿ ಜಮೀನನ್ನು ತೋಟಗಾರಿಕೆ ಇಲಾಖೆಗೆ ವಾಪಸ್ಸು ಪಡೆಯಲಾಗುವುದು.

3) ಈ ಪ್ರದೇಶದಲ್ಲಿರುವ ಸಸ್ಯ ಸಂಪತ್ತು ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ ಆಸ್ತಿಯಾಗಿದ್ದು, ಇವುಗಳನ್ನು ಯಾವುದೇ ಕಾರಣಕ್ಕೂ ನಾಶ ಮಾಡಬಾರದು.

4) ಮೇಲ್ಕಂಡ ನಿಬಂಧನೆಗಳಿಗೆ ಒಳಪಟ್ಟು ಸದರಿ ಕ್ಷೇತ್ರದಲ್ಲಿ ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು ಇವರಿಗೆ ಹಸ್ತಾಂತರಿಸಲು ಗುರುತಿಸಲಾಗುವ 70.00 ಎಕರೆ ಜಮೀನಿನ ನಕ್ಷೆಗೆ ನಿರ್ದೇಶನಾಲಯದಿಂದ ಅನುಮೋದನೆ ಪಡೆದ ನಂತರವೇ ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು ರವರಿಗೆ ಹಸ್ತಾಂತರಿಸಲು ಕ್ರಮ ವಹಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ.ರಾಮಲಿಂಗಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ತೋಟಗಾರಿಕೆ ಇಲಾಖೆ.

**P.R. 802**
**S.C. 10**

## ಹಿಂದುಳಿದ ವರ್ಗಗಳ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಹಿವಕ 564 ಬಿಎಂಎಸ್ 2014, ಬೆಂಗಳೂರು, 11ನೇ ಸೆಪ್ಟೆಂಬರ್, 2014.**

ಸರ್ಕಾರದ ಆದೇಶ ಸಂಖ್ಯೆ ಹಿಂವಕ 359 ಬಿಎಂಎಸ್ 2013 ದಿನಾಂಕ:21–12–2013ರ ಮಾರ್ಗಸೂಚಿಯಲ್ಲಿನ ಕಂಡಿಕೆ–2ರ ಉಪ ಕಂಡಿಕೆ–1ರಲ್ಲಿನ ಎರಡನೇ ಸಾಲಿನಲ್ಲಿ **'ಸಂಸ್ಥೆಯು ನೋಂದಣಿಯಾಗಿ 3 ವರ್ಷಗಳಾಗಿರಬೇಕು'** ಎಂಬುದರ ಬದಲಾಗಿ **'ಸಂಸ್ಥೆಯು ನೋಂದಣಿಯಾಗಿ 2 ವರ್ಷಗಳಾಗಿರಬೇಕು'** ಎಂದು ಹಾಗೂ

ಕಂಡಿಕೆ–2ರ ಉಪ ಕಂಡಿಕೆ–3ರಲ್ಲಿನ ಮೊದಲನೇ ಸಾಲಿನಲ್ಲಿ **'ಹಿಂದಿನ ಮೂರು ವರ್ಷಗಳ ಆಡಿಟ್ ವರದಿಗಳನ್ನು'** ಎಂಬುದರ ಬದಲಾಗಿ **'ಹಿಂದಿನ ಎರಡು ವರ್ಷಗಳ ಆಡಿಟ್ ವರದಿಗಳನ್ನು'** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್.ಎರೆಕುಪ್ಪಿ,**
ಸರ್ಕಾರದ ಅಧೀನ ಕಾರ್ಯದರ್ಶಿ–2(ಪ್ರಭಾರ),
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**P.R. 803**
**S.C. 7500**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಬಾದಾಮಿ ಕಂದಾಯ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇಲ್ಲಿ ಖಾಲಿಯಿರುವ ಒಂದು ನೋಟರಿ ಹುದ್ದೆಯನ್ನು ತುಂಬುವ ಬಗ್ಗೆ (ಶ್ರೀ ಅಶೋಕ ಹಣಮಂತರಾವ್ ಕುಲಕರ್ಣಿ ಇವರ ನಿಧನದಿಂದ ತೆರವಾದ ಹುದ್ದೆ).

**ಓದಲಾಗಿದೆ :**
1. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಜಿಲ್ಲೆ, ದಿ: 29.05.2013
2. ಸರ್ಕಾರದ ಪತ್ರ ಸಂಖ್ಯೆ: ಲಾ112 ಎಲ್‌ಸಿಎಲ್ 2013, ದಿ: 17.07.2013.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಜಿಲ್ಲೆ ಇವರ ಪತ್ರ ದಿ: 12.12.2013.
4. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ: ಜಿಎಸ್‌ಆರ್ 114(ಎ) ದಿನಾಂಕ: 24.02.2009.
5. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ: ಲಾ 61 ಎಲ್‌ಸಿಎಲ್ 2009, ದಿನಾಂಕ: 24.07.2010 ಮತ್ತು ಲಾ 53 ಎಲ್‌ಸಿಎಲ್ 2013, ದಿ: 23.07.2013.
6. ಸಂದರ್ಶನ ಸೂಚನಾ ಪತ್ರ ಸಂಖ್ಯೆ: ಲಾ 112 ಎಲ್‌ಸಿಎಲ್ 2013, ದಿ: 23.05.2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಜಿಲ್ಲೆ ಇವರ ಪತ್ರ ದಿನಾಂಕ: 29.05.2013ರಲ್ಲಿ ಶ್ರೀ ಅಶೋಕ ಹಣಮಂತರಾವ್ ಕುಲಕರ್ಣಿ, ನೋಟರಿ ಇವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆಯಿದೆ ಎಂಬ ವರದಿಯ ಹಿನ್ನೆಲೆಯಲ್ಲಿ, ಓದಲಾದ (2)ರ ಸರ್ಕಾರದ ಪತ್ರದಲ್ಲಿ ಸದರಿ ಹುದ್ದೆಯನ್ನು ಭರ್ತಿ ಮಾಡಲು ಸ್ಥಳೀಯರಿಂದ ಅರ್ಜಿಗಳನ್ನು ಅಹ್ವಾನಿಸಿ ನೋಟರಿಗಳ ಅಧಿನಿಯಮ / ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12 ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಜಿಲ್ಲೆ ಇವರನ್ನು ದಿನಾಂಕ: 17.07.2013 ರಂದು ಕೋರಲಾಗಿತ್ತು.

ಅದರಂತೆ ಮೇಲೆ ಓದಲಾದ (3)ರಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಜಿಲ್ಲೆ ಇವರು ದಿನಾಂಕ: 12.12.2013ರ ಪ್ರಸ್ತಾವನೆಯೊಂದಿಗೆ 26 ಜನರ ಮೆಮೋರಿಯಲ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ ಓದಲಾದ (4)ರಲ್ಲಿ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ ಓದಲಾದ (5)ರ ಅಧಿಸೂಚನೆಗಳಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ ಓದಲಾದ (6)ರ, ದಿನಾಂಕ: 23.05.2014ರ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ, ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 112 ಎಲ್‌ಸಿಎಲ್ 2013 ಬೆಂಗಳೂರು, ದಿನಾಂಕ: 15.07.2014**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಶ್ರೀ ಗಡದ್ ಯಮನಪ್ಪ, ವಕೀಲರು, ಸನ್ ಆಫ್ ಶ್ರೀ ಗಡದ್ ಗ್ಯಾನಪ್ಪ, ಬಾದಾಮಿ– 587 201, ಬಾಗಲಕೋಟೆ ಜಿಲ್ಲೆ ಇವರ ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬಾದಾಮಿ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ–501–0–ಇತರೆ ಸ್ವೀಕೃತಿಗಳು–06 ಇತರೆ ಬಾಬ್ತುಗಳಿಗೆ (0070–01–501–0–06)ನೋಟರಿ ನಿಯಮಗಳಲ್ಲಿ ನಿಗಧಿಪಡಿಸಲಾದ ರೂ.1000–00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ. 1952ರ ಕಲಂ4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR.792**
**SC-25**

**ಜೆ.ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ(ಆಡಳಿತ–2)(ಪ್ರಭಾರ)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ಕಂದಾಯ ತಾಲ್ಲೂಕಿನಲ್ಲಿ ಖಾಲಿಯಿರುವ ನೋಟರಿ ಹುದ್ದೆ ತುಂಬುವ ಬಗ್ಗೆ. (ಶ್ರೀ ಜಿ.ಟಿ.ರಾಜಶೇಖರಯ್ಯ ಇವರ ನಿಧನದಿಂದ ತೆರವಾದ ಹುದ್ದೆ)

**ಓದಲಾಗಿದೆ :**

1. ಸರ್ಕಾರದ ಪತ್ರ ಸಂಖ್ಯೆ: ಲಾ 121 ಎಲ್‌ಸಿಎಲ್ 2013, ದಿ: 25.07.2013.
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ ಇವರ ಪತ್ರ ದಿ: 30.08.2013.
3. ಸರ್ಕಾರದ ಪತ್ರ ಸಂಖ್ಯೆ: ಲಾ 121 ಎಲ್‌ಸಿಎಲ್ 2013, ದಿ: 01.10.2013.
4. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ, ದಿ: 07.01.2014.
5. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ: ಜಿಎಸ್‌ಆರ್ 114(ಎ), ದಿನಾಂಕ: 24.02.2009.
6. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ: ಲಾ 61 ಎಲ್‌ಸಿಎಲ್ 2009, ದಿನಾಂಕ: 24.07.2010 ಮತ್ತು ಲಾ 53 ಎಲ್‌ಸಿಎಲ್ 2013, ದಿ: 23.07.2013.
7. ಸಂದರ್ಶನ ಸೂಚನಾ ಪತ್ರ ಸಂಖ್ಯೆ: ಲಾ 121 ಎಲ್‌ಸಿಎಲ್ 2014, ದಿ: 23.05.2014.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 25.07.2013ರ ಸರ್ಕಾರದ ಪತ್ರದಲ್ಲಿ ಶ್ರೀ ಜಿ.ಟಿ. ರಾಜಶೇಖರಯ್ಯ ನೋಟರಿ, ಚಳ್ಳಕೆರೆ ಕಂದಾಯ ತಾಲ್ಲೂಕು ಇವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ವರದಿ ಕೋರಲಾಗಿದ್ದು, ಅದರಂತೆ, ಓದಲಾದ (2)ರ ದಿನಾಂಕ: 30.08.2013ರ ಪ್ರಸ್ತಾವನೆಯಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ ಇವರು ಸದರಿ ನೋಟರಿಯವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೆಂದು ವರದಿ ನೀಡಿರುತ್ತಾರೆ.

ಓದಲಾದ (3)ರ ಸರ್ಕಾರಿ ಪತ್ರದಲ್ಲಿ ಸದರಿ ಹುದ್ದೆಯನ್ನು ಭರ್ತಿ ಮಾಡಲು ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ / ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12 ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ ಇವರನ್ನು ದಿನಾಂಕ: 01.10.2013 ರಂದು ಕೋರಲಾಗಿತ್ತು.

ಅದರಂತೆ, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ ಇವರು ಮೇಲೆ ಓದಲಾದ (4)ರಲ್ಲಿ ದಿನಾಂಕ: 07.01.2014ರ ಪ್ರಸ್ತಾವನೆಯೊಂದಿಗೆ 26 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ ಓದಲಾದ (5)ರಲ್ಲಿ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ ಓದಲಾದ (6)ರ ಅಧಿಸೂಚನೆಗಳಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ ಓದಲಾದ (7)ರ ದಿನಾಂಕ: 23.05.2014ರಲ್ಲಿ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ, ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 121 ಎಲ್‌ಸಿಎಲ್ 2013 ಬೆಂಗಳೂರು, ದಿನಾಂಕ: 28.10.2014**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಶ್ರೀ ಎನ್.ಬೀರಪ್ಪ, ಸನ್ ಆಫ್ ನಿಂಗಪ್ಪ, ವರ್ಷಿತ ನಿಲಯ, ಬಿಎಸ್‌ಎನ್‌ಎಲ್ ಟವರ್ ಹತ್ತಿರ, ಟಿ.ಆರ್.ನಗರ್, ಚಳ್ಳಕೆರೆ–577 522, ಚಿತ್ರದುರ್ಗ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಚಳ್ಳಕೆರೆ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ – 501–0–ಇತರೆ ಸ್ವೀಕೃತಿಗಳು–06 ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗಧಿಪಡಿಸಲಾದ ರೂ.1000–00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment WPP No. 297



ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ. 1952ರ ಕಲಂ4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಕಾನೂನು ಇಲಾಖೆ (ಆಡಳಿತ-2)

PR.793
SC-25

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಬೆಂಗಳೂರು ನಗರ ಜಿಲ್ಲೆ ಖಾಲಿಯಿರುವ ನೋಟರಿ ಹುದ್ದೆಯನ್ನು ತುಂಬುವ ಬಗ್ಗೆ. (ಶ್ರೀ ಬಿ.ಎಲ್.ಚಿದಂಬರ ರೆಡ್ಡಿ ಇವರ ನಿಧನದಿಂದ ತೆರವಾದ ಹುದ್ದೆ)

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ: ಲಾ 90 ಎಲ್‌ಸಿಎಲ್ 2013, ದಿ: 03.05.2013.
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಜಿಲ್ಲೆ ಇವರ ದಿನಾಂಕ: 20.07.2013.
3. ಸರ್ಕಾರದ ಪತ್ರ ಸಂಖ್ಯೆ: ಲಾ 90 ಎಲ್‌ಸಿಎಲ್ 2013, ದಿ: 21.09.2013.
4. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಜಿಲ್ಲೆ, ದಿನಾಂಕ: 03.01.2014.
5. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ: ಜಿಎಸ್‌ಆರ್ 114(ಎ), ದಿನಾಂಕ: 24.02.2009.
6. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ: ಲಾ 61 ಎಲ್‌ಸಿಎಲ್ 2009, ದಿನಾಂಕ: 24.07.2010 ಮತ್ತು ಲಾ 53 ಎಲ್‌ಸಿಎಲ್ 2013, ದಿ: 23.07.2013.
7. ಸಂದರ್ಶನ ಸೂಚನಾ ಪತ್ರ ಸಂಖ್ಯೆ: ಲಾ 90 ಎಲ್‌ಸಿಎಲ್ 2013, ದಿನಾಂಕ: 23.05.2014.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 03.05.2013ರ ಸರ್ಕಾರದ ಪತ್ರದಲ್ಲಿ ಶ್ರೀ ಬಿ.ಎಲ್.ಚಿದಂಬರ ರೆಡ್ಡಿ, ನೋಟರಿ, ಬೆಂಗಳೂರು ನಗರ ಕಂದಾಯ ತಾಲ್ಲೂಕು ಇವರ ಮರಣ ಪ್ರಮಾಣ ಪತ್ರವನ್ನು ಒದಗಿಸುವುದರೊಂದಿಗೆ ಇವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ವರದಿ ಕೋರಲಾಗಿದ್ದು, ಅದರಂತೆ, ಓದಲಾದ (2)ರ ದಿನಾಂಕ: 20.07.2013ರ ಪ್ರಸ್ತಾವನೆಯಲ್ಲಿ, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ನಗರ ಜಿಲ್ಲೆ ಇವರು ಸದರಿ ನಿಧನ ಹೊಂದಿರುವ ನೋಟರಿಯವರ ಮರಣ ಪ್ರಮಾಣ ಪತ್ರವನ್ನು ಒದಗಿಸುವುದರೊಂದಿಗೆ, ಅವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೆಂದು ವರದಿ ನೀಡಿರುತ್ತಾರೆ.

ಓದಲಾದ (3)ರ ಸರ್ಕಾರದ ಪತ್ರದಲ್ಲಿ ಸದರಿ ಹುದ್ದೆಯನ್ನು ಭರ್ತಿ ಮಾಡಲು ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ / ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12 ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ನಗರ ಜಿಲ್ಲೆ ಇವರನ್ನು ದಿನಾಂಕ: 21.09.2013 ರಂದು ಕೋರಲಾಗಿತ್ತು.

ಅದರಂತೆ, ಮೇಲೆ ಓದಲಾದ (4)ರಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ನಗರ ಜಿಲ್ಲೆ ಇವರು ದಿನಾಂಕ: 03.01.2014ರ ಪ್ರಸ್ತಾವನೆಯೊಂದಿಗೆ 35 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ ಓದಲಾದ (5)ರಲ್ಲಿ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ ಓದಲಾದ (6)ರ ಅಧಿಸೂಚನೆಗಳಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ ಓದಲಾದ (7)ರ ದಿನಾಂಕ: 23.05.2014ರಲ್ಲಿ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ, ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 90 ಎಲ್‌ಸಿಎಲ್ 2013 ಬೆಂಗಳೂರು, ದಿನಾಂಕ: 28.10.2014**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಶ್ರೀಮತಿ ವತ್ಸಲ, ವೈಫ್ ಆಫ್ ನರಸಿಂಹಮೂರ್ತಿ.ಬಿ. ನಂ.10. 13ನೇ "ಸಿ" ಕ್ರಾಸ್, ಅಗ್ರಹಾರ ದಾಸರಹಳ್ಳಿ, ಬೆಂಗಳೂರು – 560 079 ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬೆಂಗಳೂರು ನಗರ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ – 501–0–ಇತರೆ ಸ್ವೀಕೃತಿಗಳು–06 ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗಧಿಪಡಿಸಲಾದ ರೂ.1000–00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ. 1952ರ ಕಲಂ4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜೆ.ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಕಾನೂನು ಇಲಾಖೆ (ಆಡಳಿತ-2)

PR.794
SC-25

*ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59